ಎಚ್. ಎಸ್. ಗೋಪಾಲರಾಯ

# ಬೈಲಕೋನೇನಹಳ್ಳಿ ಶಿಲಾಶಾಸನ

ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಮಾಚೋಹಳ್ಳಿಗೆ ಈಶಾನ್ಯ ಬೈಲಕೋನೇನಹಳ್ಳಿ ಗ್ರಾಮಕ್ಕೆ ಸೇರಿದ ಶ್ರೀ ಕೂನಪ್ಪನವರ ಜಮೀನಿನಲ್ಲಿರುವ ಶಿಲಾಶಾಸನದತ್ತ ನನ್ನ ಗಮನ ಸೆಳೆದವರು, ಕ. ವಿ. ಮಂಡಳಿಯ ಕನ್ನಡ ಘಟಕದಲ್ಲಿ ಕೆಲಸ ಮಾಡುತ್ತಿರುವ ಗೆಳೆಯ ಶ್ರೀ ಕೆ. ಎಂ. ಮುನಿಕೃಷ್ಣಪ್ಪ ಮತ್ತು ಶ್ರೀ ಕೃಷ್ಣ ಅವರು.

ಬಹುತೇಕ ಶಿಲಾಶಾಸನಗಳಿಗೆ ಅಂಟಿಕೊಂಡಿರುವಂತೆಯೇ, ಈ ಶಾಸನದ ಬಗೆಗೂ ಇರುವ ನಿಧಿ, ತಲೆ ಕೆಳಗಾಗಿ ನಿಂತು ಓದುವ, ತಲೆಯೊಡೆದು ಸಾಯುವ ಕತೆಗೆ ಹೆದರದೆ, ಶಾಸನದ ಪ್ರತಿಮಾಡಲು, ಅಭ್ಯಸಿಸಲು ಮಾಚೋಹಳ್ಳಿಯ ಯುವಗೆಳೆಯರ ತಂಡವೇ ಅಲ್ಲದೆ, ಶಾಸನವಿರುವ ಜಮೀನಿನ ಶ್ರೀ ಕೂನಪ್ಪನವರ ಕುಟುಂಬದವರ ನೆರವನ್ನು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಎಲ್ಲ ಹಳ್ಳಿಗಳಲ್ಲೂ ಇಂತಹ ನೆರವು ದೊರೆತಾಗ ಶಾಸನಗಳ, ಐತಿಹಾಸಿಕ ಸ್ಮಾರಕಗಳ ರಕ್ಷಣೆಯ ಕಾರ್ಯ ಸುಲಭವಾಗುತ್ತದೆ.

ಶ್ರೀ ಕೂನಪ್ಪನವರ ಜಮೀನಿನಲ್ಲಿ ಪೂರ್ವಾಭಿಮುಖವಾಗಿ ನಿಲ್ಲಿಸಲ್ಪಟ್ಟಿರುವ, ಶಾಸನವಿರುವ ಕಣಶಿಲೆಯ ಚಪ್ಪಡಿಕಲ್ಲಿನ ಅಳತೆ : ಉದ್ದ ೧೦ ಅಡಿ, ಅಗಲ ೩ ಅಡಿ. ಇದರಲ್ಲಿ ಮೇಲ್ಭಾಗದಲ್ಲಿ ನಡುವೆ ಪೀಠದ ಮೇಲಿರುವ ಲಿಂಗ, ಎಡ ಅಂಚಿನಲ್ಲಿ ಚಂದ್ರ, ಎಡ ಮಧ್ಯೆ ಸರ್ಪ, ಬಲ ಮಧ್ಯೆ ಬಸವ, ಬಲ ಅಂಚಿನಲ್ಲಿ ಸೂರ್ಯರ ಕೊರೆದ ರೇಖಾಚಿತ್ರವಿದೆ. ರೇಖಾಚಿತ್ರಣದ ಕೆಳಗೆ ಕಲ್ಲಿನ ೬ ಅಡಿ ಉದ್ದ, ೭ ಅಡಿ ಅಗಲದ ಭಾಗದಲ್ಲಿ ೨೦ ಸಾಲಿನ ಶಾಸನವನ್ನು ಖಂಡರಿಸಲಾಗಿದೆ.

### ಶಾಸನದ ಪಾಠ

೧. ವಿಭವ ಸಂವಚರದ ಚಯಿತ್ರ ಸು ೧೦ (ಸೋ)ಸ್ವಸ್ತಿ ಸಮಸ್ತ

೨. ಭುವನಾಸ್ರಯಂ ಶ್ರೀಮತು ಪ್ರತಾಪ ಚಕ್ರವರ್ತ್ತಿ ಹೊಯಿ

೩. ಸಣ ಶ್ರೀ ವೀರಬಲ್ಲಾಳ ದೇವರಸರು ಪಿತುವೀ ರಾಜ್ಯಮಾಳುವಲ್ಲಿ [x]

೪. ಶ್ರೀಮನು ಮಹಾನಾಯಕ ಚ(ಯಿ) ಮೇದಿನಿ ಮನ್ನೆಯರ ಗಂಡ

೫. ಉಪ್ಪೂರ ಬಂಮೆಯ ನಾಯಕರು ಕುಕಲನಾಡನಾಳುತ ಇಜಿ [x]

೬. ಬೊಂಮಯ ನಾಯಕರು ಕುಕಲನಾಡ ಪ್ರಭುಗಂ ಆ ನಾಡ ಹನುಗೊರ

೭. ಮಲಯಪ್ಪ ಗೋಪಗವಿಡ ಬೋಕಣ ಬಂಮುಪಾದಿ ಸಿರಿಯಕ ಪಿಡಾರಿಯ [x]

೮. ಸೆಟಿ ಮಲಪ್ಪ ಸೊಂಣಸೆಟಿ ತಾಮತದ ಬರಪದೆ ಬಿನ್ನಹಿಸಲಾಗಿ ದಯ [x]

೯. ವಿರಯನಾದಾನ ಹೂವ ಅಸಿ ಇಜಕಣ ಸೆಟಿಗಳೆ ಸಮಸ್ತ ಪ್ರಜೆ ಗಲುಡುಗಳು

೧೦. ಶ್ರೀಮತು ಕುಕಲನಾಡ ಪ್ರಭು ಕಿತ್ತನೆಲೆಯ ದೊಡನ ಗಲುಡರ ಮಕಳು ಗ

೧೧. ಉಡಪ್ಪ ಮಾರಪ್ಪ ಗಂಗಣ ಅಂಣನ ಹೊಂನಜನವರಿಗೆ ಕುಕಲನಾಡೊಳ ಗಣ ಮು

೧೨. ದುಗೆರೆಯನು ಸಬ್ಬ್ರ್ಕೊಡುಗೆಯಾಗಿ ಚತುಸೀಮೆ ಸಹಿತವಾಗಿ ಅಲೂರ

೧೩. ಲು ತಪ್ಪಾಗಿಸೆ ವೀಳೆಯ ಉಂಡಿಗೆ ಆಉದೊಂದು ಅಪರಾಧಉೂ ಎ(ಲ)ದಂ

೧೪. ತ್ಯಾಗಿ ಕೊಟ್ಟ ಕೊಡಗೆ ತಾಬ್ರ ಸಸನದ ಪಡಿಯ ಸಿಲೆಯ ಸಾಸನ ಯಿ ಊರಿಗೆ ಆ[x]

೧೫. ಕರು ಆ ನಾಡ ಆಳುವ ಅರಸುನಾಯಕರು ಆ ಊರಿಂಗೆ ತಪ್ಪಿ ನಡೆದವರು ಯಿ

೧೬. ಪ್ಪತೊಂದು ಪಿತುಗಳ ನರಕಕ್ಕೆ ಯಿರೆ ದೇವರು ತಾಯಿಗೆ ಒಡವು (ಜ)ದೇವರಿಗೆ

೧೭. ಸತ್ರಾ ಅಳಿದವರು ಗಂಗೆ ತಡಿಯ ಕವಿಲೆಯ ಕೊಂದ ದೋಸದಲು ಹೋಹರು

೧೮. ಯಿ ಮರಿಯಾದೆಗೆ ಭೂಮಿಉ ಚಂದ್ರನುಳುಂನವರ ಸಲುಉದು ಮಂ

೧೯. ಗಳ ಮಹಾ ಶ್ರೀ ಶ್ರೀ ನಾಯಕರ ಒಪ್ಪ (ಚ್ರಂ) ನಡಸುವ ನಾಡ ಒಪ್ಪ ಶ್ರೀ ಮು

೨೦. ಕ್ತನಾತ ಯಿ ಸಸನವ ಬರದ ಸೇನಬೋವ ಕೇಸವದೇವ ಆಚಾರಿ ಚಿನೋಜ

ಸಾರಾಂಶ : ಶ್ರೀಮತು ಪ್ರತಾಪ ಚಕ್ರವರ್ತಿ ಹೊಯಿಸಣ ಶ್ರೀ ವೀರಬಲ್ಲಾಳ ದೇವರಸರು ಪೃಥ್ವೀ ರಾಜವನ್ನಾಳುವಾಗ ಉಪ್ಪಾರ ಬಂಮೆಯ ನಾಯಕರು ಕುಕಲನಾಡನ್ನು ಆಳುತ್ತ ಇರಲು, ಅವರು ಮತ್ತು ಆ ನಾಡಿನ ಹನುಗೂರ ಮಲಯಪ್ಪ, ಗೋಪಗವಿಡ, ಬೋಕಣ, ಬಂಮುಪ, ಸಿರಿಯಕ, ಪಿಡಾರಿಯ(x) ಸೆಟಿ, ಮಲಪ್ಪ, ಸೊಂಣಸೆಟಿ ಇವರುಗಳು ತಾಮ್ರ ಪತ್ರದ ಮೂಲಕ ಬಿನ್ನವಿಸಲಾಗಿ ವೀರಯನು ದಾನ ಮಾಡಿದ. ಜಕಣಸೆಟಿ, ಸಮಸ್ತ ಪ್ರಜೆ, ಗಲುಡುಗಳು, ಕುಕಲನಾಡಿನ ಕಿತ್ತನೆಲೆಯ ದೊಡನ ಗಲುಡರ ಮಕ್ಕಳು ಗಲುಡಪ್ಪ, ಮಾರಪ್ಪ, ಗಂಗಣ, ಅಂಣನ ಹೊಂನಜನವರಿಗೆ ಕುಕಲನಾಡಿನ ಮುದುಗೆರೆಯನ್ನು ಸಬ್ಬ್ರ್ಕೊಡುಗೆಯಾಗಿ ಚತುಸೀಮೆ ಸಹಿತವಾಗಿ ಕೊಟ್ಟ ಕೊಡುಗೆಗೆ ತಾಮ್ರ ಶಾಸನದ ಪಡಿಯ ಶಿಲಾಶಾಸನ. ಆ ಊರಿನಲ್ಲಿ ತಪ್ಪಾಗ ದಂತೆ ವೀಳೆಯದ ಒಪ್ಪಿಗೆಯಿಂದ ಯಾವ ಅಪರಾಧವೂ ಇಲ್ಲದಂತಾಗಿ ದಾನ ನೀಡಲಾಗಿದೆ. ಆ ಊರಿಗೆ ತಪ್ಪಿ ನಡೆದವರು ಇಪ್ಪತ್ತೊಂದು ಪಿತೃಗಳ ನರಕಕ್ಕೆ ಹೋಗುವರು. ಅಳಿದವರು ಗಂಗೆ ತಡಿಯ ಕವಿಲೆಯ ಕೊಂದ ದೋಷದಲ್ಲಿ ಹೋಗುವರು, ಮರ್ಯ್ಯಾದೆಗೆ ಭೂಮಿಯ ಚಂದ್ರನಿರುವವರೆಗೆ ಸಲುವುದು. ಇದಕ್ಕೆ ನಾಯಕರ ಒಪ್ಪ ಮತ್ತು ನಡಸುವ ನಾಡ ಒಪ್ಪ ಶ್ರೀ ಮುಕ್ತನಾಥನದು. ಈ ಶಾಸನವನ್ನು ಬರೆದವನು ಸೇನ ಬೋವ ಕೇಶವದೇವ. ಆಚಾರಿ ಚಿನೋಜ ಶಾಸನವನ್ನು ಖಂಡರಿಸಿದ್ದಾನೆ(!).

ವಿವರಣೆ : ಶಾಸನದ ಬರಹಕ್ಕೆ ಉಪಯೋಗಿಸಿರುವ ಕಣಶಿಲೆಯ ಚಪ್ಪಡಿಕಲ್ಲಿನ ಬಲ ಅಂಚಿನಲ್ಲಿ ಚಿಕ್ಕ

ಎದ್ದಿರುವುದರಿಂದ ಕೆಲವು ಸಾಲುಗಳ ಕೊನೆಯ ಅಕ್ಷರಗಳು ಹಾಳಾಗಿವೆ. ಹಲವೆಡೆ ಶಾಸನದ ಭಾಷೆ ಅಸ್ಪಷ್ಟ ಹಾಗೂ ದೋಷಪೂರಿತ. ೪ನೆಯ ಸಾಲಿನಲ್ಲಿ 'ಜ(ಯಿ)ಮೇದಿನಿಮನ್ನೆಯರ ಗಂಡ'–ಎಂಬ ಭಾಗದಲ್ಲಿ 'ಯಿ' ಅಸ್ಪಷ್ಟ ಹಾಗೂ 'ಜಯಿ' ಗೆ ಅರ್ಥಸ್ಪಷ್ಟತೆಯಿಲ್ಲ. ೭ನೆಯ ಸಾಲಿನ ಕೊನೆಯಲ್ಲಿ 'ಬಂಮುಪಾದಿ ಸಿರಿಯಕ ಪಿಡಾರಿಯ(–)' ಭಾಗದ ಅರ್ಥವೂ ಸ್ಪಷ್ಟವಿಲ್ಲ. ೮ನೆಯ ಸಾಲಿನಲ್ಲಿ 'ತಾಮ್ರಪತ್ರದ ಬರಪದ' ಎಂದಿರಬೇಕಾಗಿದ್ದಿರಬಹುದು. 'ಬದಲಿಗೆ ತಾಮಿತದ ಬಂಪದ' ಎಂದು ಕೆತ್ತಲಾಗಿದೆ. ೯ನೆಯ ಸಾಲಿನಲ್ಲಿ 'ಹೂವ ಅಸಿ' ಎಂಬಲ್ಲೂ ಅರ್ಥಸ್ಪಷ್ಟತೆಯಿಲ್ಲ. ೧೬ನೆಯ ಸಾಲಿನ 'ದೇವರು ತಾಯಿಗೆ ಒಡವ್ವ(ಜ)ದೇವರಿಗೆ ಸತ್ರಾ'– ಎಂಬ ಭಾಗಕ್ಕೂ ಖಚಿತವಾದ ಅರ್ಥ ಒದಗಿಸಲು ಸಾಧ್ಯವಾಗಿಲ್ಲ.

ಇದೊಂದು ದಾನಶಾಸನ. ದಾನಶಾಸನದ ಮೇಲ್ಭಾಗದಲ್ಲಿ ಸೂರ್ಯ, ಲಿಂಗ, ಚಂದ್ರರ ರೇಖಾಚಿತ್ರ ಅಥವಾ ಉಬ್ಬುಶಿಲ್ಪಗಳ ಕೆತ್ತನೆ ಇರುವುದು ಸಹಜ. ಲಿಂಗದ ಮುಂದೆ ಬಸವನ ಚಿತ್ರವಿರುವುದೂ ಅಪರೂಪವಲ್ಲ. ಆದರೆ ಈ ಶಾಸನದಲ್ಲಿ ಸರ್ಪದ ಕೆತ್ತನೆ, ಅದರಲ್ಲೂ ಹೆಡೆ ಇಲ್ಲದೆ ಚಲನಸ್ಥಿತಿಯಲ್ಲಿನ ಕೆತ್ತನೆ ಗಮನ ಸೆಳೆಯುತ್ತದೆ.

ಶಾಸನದ ಪ್ರಕಾರ ದಾನ ಮಾಡಲು ಬಿನ್ನವಿಸಿದವರು ಬೊಂಮಯ ನಾಯಕ, ಹನುಗೂರ ಮಲಯಪ್ಪ, ಗೋಪಗವಿಡ, ಜೋಕಣ ಮತ್ತಿತರರು. ದಾನ ನೀಡಿದವನು ವಿರಯ. ದಾನ ಪಡೆದವರು ಕಿತ್ತನೆಲೆಯ ದೊಡನಗಲುಡರ ಮಕ್ಕಳು ಗಲುಡಪ್ಪ, ಮಾರಪ್ಪ, ಗಂಗಣ ಮತ್ತಿತರರು. ವಿರಯನು ನೀಡಿದ ದಾನ ಮುದುಗೆರೆ. ಅದನ್ನು ಚತುಸ್ಸೀಮೆ ಸಹಿತ ಸರ್ಬ್ಬಕೊಡುಗೆಯಾಗಿ ನೀಡಲಾಗಿದೆ. ಆದರೆ ದಾನ ನೀಡಲು ಕಾರಣವೇನು ಎಂಬುದನ್ನು ಶಾಸನ ತಿಳಿಸುವುದಿಲ್ಲ.

ಶಾಸನದಲ್ಲಿ ಉಲ್ಲೇಖಿಸಲಾಗಿರುವ ಹೊಯಿಸಣ ಚಕ್ರವರ್ತಿ ವೀರಬಲ್ಲಾಳದೇವರಸನು ಮೂರನೆಯ ವೀರಬಲ್ಲಾಳನೆಂದು ಸ್ವೀಕರಿಸಬಹುದಾಗಿದೆ. ಇವನ ಆಳ್ವಿಕೆಯ ಕಾಲ ಕ್ರಿ. ಶ. ೧೨೯೨ ರಿಂದ ೧೩೪೨. ಇವನ ಆಳ್ವಿಕೆಯನ್ನು ಪ್ರಸ್ತಾಪಿಸುವ, ಬೈಲಕೋನೇನಹಳ್ಳಿಯ ನೆರೆ–ಹೊರೆಯಲ್ಲೇ ಆರು ಶಾಸನಗಳು ದೊರೆತಿವೆ. (ಬ್ಯಾಡರಹಳ್ಳಿ,[1] ರಾಮಸಮುದ್ರ,[2] ಹಲಿಗೆವಡೆಯರಹಳ್ಳಿ,[3] ಮಂತಾಳು,[4] ಬೈಚಗುಪ್ಪೆ,[5] ಕಿತ್ತನಹಳ್ಳಿ[6]); ಇವುಗಳ ಕಾಲ ಕ್ರಿ. ಶ. ೧೩೩೩ ರಿಂದ ೧೩೪೦ ರ ವರೆಗೆ ಸೇರುತ್ತದೆ. ಪ್ರಸ್ತುತ ಶಾಸನದಲ್ಲಿ ಶಕವರ್ಷದ ಉಲ್ಲೇಖವಿಲ್ಲದಿದ್ದರೂ ವಿಭವ ಸಂವತ್ಸರದ ಉಲ್ಲೇಖವಿರುವುದರಿಂದ ಈ ಶಾಸನದ ಕಾಲವನ್ನು ಕ್ರಿ. ಶ. ೧೩೨೯ ಎಂದು ನಿರ್ಧರಿಸಬಹುದಾಗಿದೆ. ಶಾಸನದ ಲಿಪಿಸ್ವರೂಪವೂ ಕ್ರಿ. ಶ. ೧೪ನೆಯ ಶತಮಾನದ್ದಾಗಿದೆ.

ಈ ಶಾಸನವಲ್ಲದೆ ಕಿತ್ತನಲ್ಲಿ ಗ್ರಾಮದ ಒಂದು ಶಾಸನವೂ[7] ಕುಕ್ಕಲನಾಡನ್ನಾಳುತ್ತಿದ್ದ ಉಪ್ಪಾರ ಬಂಮಯ ನಾಯಕನನ್ನು ಪ್ರಸ್ತಾಪಿಸಿದೆ. ಆ ಶಾಸನವು ಅಸ್ಪಷ್ಟವಾಗಿರುವುದರಿಂದ, ಕಾಲದ ಉಲ್ಲೇಖವಿರಬಹುದಾದ ಭಾಗ ಹಾಳಾಗಿರುವುದರಿಂದ ವಿದ್ವಾಂಸರು ಅದರ ಕಾಲವನ್ನು ಕ್ರಿ. ಶ. ಸು. ೧೪ನೆಯ ಶತಮಾನ ಎಂದು ತೀರ್ಮಾನಿಸಿದಂತಿದೆ. ಕುಕ್ಕಲನಾಡನ್ನು ಆಳುತ್ತಿದ್ದ ಮಯಿಲೆಯನಾಯಕ ಮತ್ತು ಅವನ ತಮ್ಮ ಜೆಂನಯ ಅಥವಾ ಜಂನಯನಾಯಕನನ್ನು ನಾಲ್ಕು ಶಾಸನಗಳು

---

1. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೯, ಬೆಂಗಳೂರು ೧೧೦
2. ಅದೇ, ೧೧೧
3. ಅದೇ, ೧೧೭
4. ಅದೇ, ನೆಲಮಂಗಲ ೯
5. ಅದೇ, ಮಾಗಡಿ ೮೧
6. ಅದೇ, ನೆಲಮಂಗಲ ೧೨
7. ಅದೇ, ೧೧

ಕ್ರಿ. ಶ. ೧೩೩೩ ರಿಂದ ೧೩೪೦ ರ ವರೆಗಿನ ಅಂತರದಲ್ಲಿ ಪ್ರಸ್ತಾಪಿಸಿವೆ (ಮಂತಾಳು,[8] ಬ್ಯಾಡರಹಳ್ಳಿ,[9] ರಾಮಸಮುದ್ರ,[10] ಬೈಚಗುಪ್ಪೆ[11])— ಕ್ರಿ. ಶ. ೧೩೪೦ ರಲ್ಲೇ ಕುಕ್ಕಲನಾಡನ್ನು ಕೊಟ್ಟೆಯ ನಾಯಕ, ಬಂನೆಯ ನಾಯಕ, ಕುಮಾರ ಕೊಟ್ಟೆಯ ನಾಯಕ ಆಳುತ್ತಿದ್ದಂತೆ ಹಲಿಗೆವಡೆಯರಹಳ್ಳಿಯ[12] ಶಾಸನ ತಿಳಿಸುತ್ತದೆ. ಒಂದೇ ಕಾಲದಲ್ಲಿ ಒಂದೇ ಭೂಭಾಗವನ್ನು ಬೇರೆ ಬೇರೆ ಇಬ್ಬರು ಹೇಗೆ ಆಳಿದರು ಎಂಬ ಅನುಮಾನವನ್ನು ಎರಡು ಕಾರಣಗಳಿಂದ ನಿವಾರಿಸಿಕೊಳ್ಳಬಹುದು. ಒಂದು, ಕಾಲದ ಉಲ್ಲೇಖ ತಪ್ಪಿರಬಹುದು ; ಎರಡು, ತಾತ್ಕಾಲಿಕವಾಗಿ ಅಧಿಕಾರ ಹಸ್ತಾಂತರವಾಗಿರಬಹುದು. ಮಯಿಲೆಯ ನಾಯಕ, ಚೆಂನಯ ನಾಯಕರಿಗೆ ಮೊದಲು ಕುಕ್ಕಲನಾಡನ್ನು ಉಪ್ಪಾರ ಬೊಂಯಮ ನಾಯಕ ಆಳುತ್ತಿದ್ದುದನ್ನು ಪ್ರಸ್ತುತ ಶಾಸನವಲ್ಲದೆ, ಕಿತ್ತನಲ್ಲಿಯ ಮತ್ತೊಂದು ಶಾಸನವೂ[13] ತಿಳಿಸುತ್ತವೆ. ಹಲವಾರು ಶಾಸನಗಳಲ್ಲಿ ಪ್ರಸ್ತಾಪಿತವಾಗಿರುವ ಕುಕ್ಕಲನಾಡು 'ಬೆಂಗಳೂರು ತಾಲ್ಲೂಕಿನ ಪಶ್ಚಿಮ ಪ್ರದೇಶವೂ ಸೇರಿದಂತೆ ರಾಮನಗರ ತಾಲ್ಲೂಕಿನ ಪೂರ್ವಭಾಗ, ಮಾಗಡಿ ತಾಲ್ಲೂಕಿನ ಪಶ್ಚಿಮ ಭಾಗದ ಹಲವಾರು ಗ್ರಾಮಗಳು, ನೆಲಮಂಗಲ ತಾಲ್ಲೂಕಿನ ಕೆಲವು ಗ್ರಾಮಗಳನ್ನು ಒಳಗೊಂಡ' ಪ್ರಾದೇಶಿಕ ವಿಭಾಗ[14] ಎಂದು ಶ್ರೀ ಪಿ. ವಿ. ಕೃಷ್ಣಮೂರ್ತಿಯವರು ಗುರುತಿಸಿದ್ದಾರೆ. ಆದರೆ ಮಾಗಡಿ ತಾಲ್ಲೂಕಿನ ಪಶ್ಚಿಮ ಭಾಗಗಳು ಎಂದು ಗುರುತಿಸಿರುವುದು ಸಂದೇಹಾಸ್ಪದವಾಗಿದೆ. ಮಾಗಡಿ ತಾಲ್ಲೂಕಿನ ಪೂರ್ವಭಾಗ ಅಥವಾ ಪೂರ್ಣಭಾಗವೂ (?) ನೆಲಮಂಗಲ ತಾಲ್ಲೂಕಿನ ದಕ್ಷಿಣ ಭಾಗವೂ ಕುಕ್ಕಲನಾಡಿಗೆ ಸೇರುತ್ತದೆಂದು ತಿಳಿಯಬಹುದಾಗಿದೆ.

ಈ ಶಾಸನದಲ್ಲಿ ಉಕ್ತವಾಗಿರುವ ದೊಡನ ಗಉಡರ ಮತ್ತು ಇನ್ನೆರಡು ಶಾಸನಗಳಲ್ಲಿ[15] ಉಕ್ತವಾಗಿರುವ ಹೊಂನ ಗಉಡರ ಕುಟುಂಬಗಳು ಕಿತ್ತನೆಲೆಯಲ್ಲಿ ಪ್ರಸಿದ್ಧವಾಗಿದ್ದುವು ಎಂದು ವೇದ್ಯವಾಗುತ್ತದೆ. ಶಾಸನಗಳಲ್ಲಿನ ಕಿತ್ತನೆಲ್ಲಿ ಅಥವಾ ಕಿತ್ತನೆಲೆಯು ನೆಲಮಂಗಲ ತಾಲ್ಲೂಕಿನ ಕಿತ್ತನಹಳ್ಳಿ ಎಂದು ಗುರುತಿಸಬಹುದಾಗಿದೆ.

ಈ ಶಿಲಾಶಾಸನವು ತಾಮ್ರಶಾಸನದ ಪಡಿಯೆಂದು ಶಾಸನದಲ್ಲೇ ತಿಳಿಯಪಡಿಶಲಾಗಿದೆ. ದಾನಶಾಸನಗಳಿಗೆ ಸಂಬಂಧಿಸಿದಂತೆ ಇಂತಹ ತಾಮ್ರಶಾಸನಗಳಿಗೆ ಪಡಿಯ ಶಿಲಾಶಾಸನಗಳು ಇರುತ್ತಿದ್ದ ಉಲ್ಲೇಖವನ್ನು ಇದೇ ಕಾಲದ ಮತ್ತೊಂದು ಶಾಸನವೂ[16] ತಿಳಿಸುತ್ತದೆ.

ಈ ಶಾಸನದ ಮರಿಯಾದೆಗೆ ನಾಯಕರ ಒಪ್ಪವಲ್ಲದೆ ನಾಡ ಒಪ್ಪ 'ಮುಕ್ತನಾತ'ನದು. ಈ 'ಮುಕ್ತನಾತ' ಯಾರು ? ಕ್ರಿ. ಶ. ೧೩೩೬ ರ ಬ್ಯಾಡರಹಳ್ಳಿಯ ಶಾಸನದಲ್ಲೂ[17] ನಾಡವೊಪ್ಪ ಶ್ರೀ ಮುಕ್ತನಾಥ ಎಂದೇ ಇದೆ. ಈ ಮುಕ್ತನಾಥ ನೆಲಮಂಗಲ ತಾಲ್ಲೂಕಿನ ಬಿನ್ನಮಂಗಲದಲ್ಲಿರುವ ಮುಕ್ತನಾಥೇಶ್ವರ ದೇವಾಲಯದ ಮುಕ್ತನಾಥ ಎಂದು ಊಹಿಸಿದರೆ ತಪ್ಪಾಗಲಾರದು.

ಈ ಶಾಸನವನ್ನು ಬರೆದವನು ಸೇನಬೋವ ಕೇಶವದೇವ. ಕ್ರಿ.ಶ. ೧೩೪೦ ರ ರಾಮಸಮುದ್ರದ ಶಾಸನ

---

8. ಅದೇ, ೪
9. ಅದೇ, ಬೆಂಗಳೂರು ೧೧೦
10. ಅದೇ, ೧೧೧
11. ಅದೇ, ಮಾಗಡಿ ೮೧
12. ಅದೇ, ಬೆಂಗಳೂರು ೧೧೭
13. ಅದೇ, ನೆಲಮಂಗಲ ೧೧
14. ಪಿ.ವಿ. ಕೃಷ್ಣಮೂರ್ತಿ : 'ಬೆಂಗಳೂರು ಜಿಲ್ಲೆಯ ಪ್ರಾಚೀನ ಪ್ರಾದೇಶಿಕ ವಿಭಾಗಗಳು,' ಇತಿಹಾಸ ದರ್ಶನ, ೧–೧, ಡಿಸೆಂಬರ್ ೧೯೮೬, ಪು. ೨೮
15. ಎ. ಕ., ಸಂ. ೯, ಬೆಂಗಳೂರು ೧೧೦, ಮಾಗಡಿ ೮೧
16. ಅದೇ, ನೆಲಮಂಗಲ ೧೧
17. ಅದೇ, ಬೆಂಗಳೂರು ೧೧೦

ವನ್ನು[18] ಇವನ ಮಗ ಅನಂತಣ್ಣನು ಬರೆದಂತೆ ತೋರುತ್ತದೆ.

ಶಾಸನವನ್ನು ಕಲ್ಲಮೇಲೆ ಖಂಡರಣೆ ಮಾಡಿದವನು ಆಚಾರಿ ಚಿನೋಜ.

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಊರುಗಳಲ್ಲಿ ಕಿತ್ತನೆಲ್ಲಿಯ ವಿನಹ ಮತ್ತಾವ ಊರುಗಳನ್ನೂ ಈಗ ಗುರುತಿಸಲಾಗಿಲ್ಲ.

---

18. ಅದೇ, ೧೨೦